# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 642 (726)
ಸದಸ್ಯರ ಹೆಸರು : ಶ್ರೀ ಎಲ್.ಭೋಜೇಗೌಡ(ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ವಿದ್ಯಾಗಮ ಕಾರ್ಯಕ್ರಮಕ್ಕೆ ನಿಯೋಜನೆಗೊಂಡ ಶಿಕ್ಷಕರ ಸಂಖ್ಯೆ ಎಷ್ಟು; ಈ ಪೈಕಿ ಕೋವಿಡ್ ಖಾಯಿಲೆಗೆ ತುತ್ತಾಗಿ ಚೇತರಿಸಿಕೊಂಡವರು ಎಷ್ಟು; (ಜಿಲ್ಲಾವಾರು ವಿವರ ನೀಡುವುದು)</td><td>ವಿದ್ಯಾಗಮ ಕಾರ್ಯಕ್ರಮಕ್ಕೆ ನಿಯೋಜನೆಗೊಂಡು ಕೋವಿಡ್-19 ಖಾಯಿಲೆಗೆ ತುತ್ತಾಗಿ ಚೇತರಿಸಿಕೊಂಡಿರುವವರ ಶಿಕ್ಷಕರ ಮಾಹಿತಿ ಈ ಕೆಳಕಂಡಂತಿದೆ.<br><table><tr><th>ವಿವರ</th><th>ನಿಯೋಜನೆ ಗೊಂಡ ಶಿಕ್ಷಕರು</th><th>ಸೋಂಕಿಗೆ ತುತ್ತಾದವರು</th><th>ಸೋಂಕಿನಿಂದ ಚೇತರಿಸಿಕೊಂಡ ವರು</th></tr><tr><td>ಪ್ರಾಥಮಿಕ ಶಿಕ್ಷಣ</td><td>137697</td><td>4432</td><td>4395</td></tr><tr><td>ಪ್ರೌಢ ಶಿಕ್ಷಣ</td><td>47310</td><td>2837</td><td>2825</td></tr></table>ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಲಾಗಿದೆ.</td></tr>
<tr><td>ಆ</td><td>ಕೋವಿಡ್ ನಿಯಂತ್ರಣಕ್ಕೆ ನಿಯೋಜನೆಗೊಂಡು ಈ ಖಾಯಿಲೆಗೆ ತುತ್ತಾಗಿ ಮರಣ ಹೊಂದಿದ ಶಿಕ್ಷಕರಿಗೆ ಸರ್ಕಾರವು ಘೋಷಿಸಿರುವಂತೆ ವಿಮಾ ಪರಿಹಾರವನ್ನು ನೀಡಿದೆಯೇ; ನೀಡಿದ್ದಲ್ಲಿ ಎಷ್ಟು ಜನ ಶಿಕ್ಷಕರಿಗೆ ಎಷ್ಟೆಷ್ಟು ಪರಿಹಾರ ನೀಡಲಾಗಿದೆ. (ಜಿಲ್ಲಾವಾರು ಮತ್ತು ಫಲಾನುಭಾವಿವಾರು ವಿವರ ನೀಡುವುದು)</td><td>ಹೌದು.<br>ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಕೋವಿಡ್-19ರ ನಿಯಂತ್ರಣ ಕಾರ್ಯಕ್ಕೆ ನಿಯೋಜನೆಗೊಂಡು ಈ ಖಾಯಿಲೆಗೆ ತುತ್ತಾಗಿ ಮರಣ ಹೊಂದಿದ ಶಿಕ್ಷಕರ ಕುಟುಂಬದವರಿಗೆ ಪರಿಹಾರ ಧನ ಮಂಜೂರಾತಿಗೆ ಸಂಬಂಧಿಸಿದಂತೆ ಉಪ ನಿರ್ದೇಶಕರು/ಜಿಲ್ಲಾಧಿಕಾರಿಗಳಿಂದ ಒಟ್ಟು 09 ಪ್ರಸ್ತಾವನೆಗಳು ಸ್ವೀಕೃತಗೊಂಡಿರುತ್ತವೆ. ಇದರಲ್ಲಿ ಇಬ್ಬರು ಶಿಕ್ಷಕರಿಗೆ ಸರ್ಕಾರದಿಂದ ಮಂಜೂರಾತಿ ಆದೇಶ ನೀಡಿದ್ದು, ಸಂಬಂಧಪಟ್ಟ ಉಪನಿರ್ದೇಶಕರುಗಳಿಗೆ ಮಂಜೂರಾತಿಗಾಗಿ ಕ್ರಮ ವಹಿಸಲು ತಿಳಿಸಲಾಗಿರುತ್ತದೆ. 02 ಪ್ರಸ್ತಾವನೆಗಳು ವಿವಿಧ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. ಉಳಿದ 05 ಪ್ರಸ್ತಾವನೆಗಳಲ್ಲಿರುವ ಮಾಹಿತಿಯನ್ನು ಪರಿಶೀಲಿಸಿ ಸಲ್ಲಿಸುವಂತೆ ತಿಳಿಸಿ ಉಪನಿರ್ದೇಶಕರಿಗೆ ಹಿಂದಿರುಗಿಸಿದೆ.<br><br>ಸರ್ಕಾರಿ ಪ್ರೌಢಶಾಲಾ ಶಿಕ್ಷಕರು ಕೋವಿಡ್-19ರ ನಿಯಂತ್ರಣಕ್ಕಾಗಿ ನಿಯೋಜನೆಗೊಂಡು ಈ ಖಾಯಿಲೆಗೆ ತುತ್ತಾಗಿ ಮರಣ ಹೊಂದಿದ ಶಿಕ್ಷಕರ ಕುಟುಂಬದವರಿಗೆ ಪರಿಹಾರ ಧನ ಮಂಜೂರಾತಿಗೆ ಸಂಬಂಧಿಸಿದಂತೆ ಉಪನಿರ್ದೇಶಕರಿಂದ ಈವರೆಗೆ ಒಟ್ಟು 02 ಪ್ರಸ್ತಾವನೆಗಳು ಸ್ವೀಕೃತಗೊಂಡಿದ್ದು, ಇದರಲ್ಲಿ 01 ಪ್ರಸ್ತಾವನೆಯನ್ನು ಸಂಬಂಧಿಸಿದ ಉಪನಿರ್ದೇಶಕರಿಗೆ ಕಳುಹಿಸಿ ಮಂಜೂರಾತಿಗೆ ಕ್ರಮವಹಿಸಲು ಅನುಮತಿ ನೀಡಿದೆ ಹಾಗೂ ಒಂದು ಪ್ರಸ್ತಾವನೆಯು ಆಯುಕ್ತರ ಹಂತದಲ್ಲಿ ಪರಿಶೀಲನೆಯಲ್ಲಿದೆ. ವಿವರವನ್ನು ಅನುಬಂಧ-2ರಲ್ಲಿ ನೀಡಲಾಗಿದೆ.</td></tr>
</table>

| | | |
|---|---|---|
| ಇ | ಕೋವಿಡ್ ನಿಯಂತ್ರಣಕ್ಕಾಗಿ ನಿಯೋಜನೆಗೊಂಡಿರುವ ಶಿಕ್ಷಕರಿಗೆ ಆರೋಗ್ಯ ರಕ್ಷಣೆಗಾಗಿ ಒದಗಿಸುತ್ತಿರುವ ಸವಲತ್ತುಗಳೇನು? (ವಿವರ ನೀಡುವುದು) | ಸರ್ಕಾರಿ ಆದೇಶ ಸಂಖ್ಯೆ:ಆಇ 190 ವೆಚ್ಚ 11/2020 ದಿನಾಂಕ:07-08-2020ರ ಆದೇಶದಂತೆ ಕೋವಿಡ್ ನಿಯಂತ್ರಣಕ್ಕಾಗಿ ನಿಯೋಜನೆಗೊಂಡಿರುವ ಶಿಕ್ಷಕರುಗಳ ಆರೋಗ್ಯ ರಕ್ಷಣೆಗಾಗಿ ವ್ಯಾಕ್ಸಿನ್ ಹಾಕಿಸಲಾಗಿರುತ್ತದೆ ಹಾಗೂ ಮಾಸ್ಕ್, ಸ್ಯಾನಿಟೈಸರ್, ಗ್ಲೌಸ್, ಫೇಸ್ ಶೀಲ್ಡ್‌ಗಳನ್ನು ಒದಗಿಸಲಾಗಿರುತ್ತದೆ. |

**ಸಂಖ್ಯೆ: ಇಪಿ 116 ಎಲ್‌ಬಿಪಿ 2021**

**(ಬಿ.ಸಿ. ನಾಗೇಶ್)**
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು